**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ತಿದ್ದುಪಡಿಯಿಂದಾಗಿ ಅಂದಾಜು ವೆಚ್ಚವು ಪ್ರತಿ ವರ್ಷಕ್ಕೆ 1743.16 ಲಕ್ಷ ರೂಪಾಯಿಗಳ ಮೊತ್ತವಾಗಿರುತ್ತದೆ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತ ಜ್ಞಾಪನ ಪತ್ರ**

| | |
|---|---|
| **3ನೇ ಖಂಡ:** | (2)ನೇ ಉಪಖಂಡವು, ನಿವೃತ್ತಿ ವೇತನಕ್ಕೆ ಅರ್ಹನಾದ ಸದಸ್ಯನಿಗೆ, ರೈಲ್ವೆ ಮೂಲಕ ಪ್ರಯಾಣಕ್ಕಾಗಿ ವಾಸ್ತವಿಕ ಪ್ರಯಾಣ ವೆಚ್ಚಗಳನ್ನು ಮರುಪಾವತಿ ಮಾಡುವ ರೀತಿಯನ್ನು ನಿಯಮಗಳ ಮೂಲಕ ನಿಯಮಿಸಲು ವಿಶೇಷ ಮಂಡಳಿಗೆ ಅಧಿಕಾರವನ್ನು ನೀಡುತ್ತದೆ. |

ಮೇಲಿನ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಎಸ್. ಸುರೇಶ್ ಕುಮಾರ್**
ನಗರಾಭಿವೃದ್ಧಿ, ಕಾನೂನು ಮತ್ತು ಸಂಸದೀಯ
ವ್ಯವಹಾರಗಳ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ರ (1957ರ ಕರ್ನಾಟಕ ಅಧಿನಿಯಮ ಸಂಖ್ಯೆ 2) ಉದ್ಧೃತ ಭಾಗ**

**xx xx xx**

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) 'ಸಭಾಪತಿ' ಎಂದರೆ ವಿಧಾನ ಪರಿಷತ್ತಿನ ಸಭಾಪತಿ;

(ಬಿ) 'ಉಪ–ಸಭಾಪತಿ' ಎಂದರೆ ವಿಧಾನ ಪರಿಷತ್ತಿನ ಉಪ–ಸಭಾಪತಿ;

(ಬಿಬಿ) 'ಸರ್ಕಾರದ ಮುಖ್ಯ ಸಚೇತಕ' ಎಂದರೆ, ವಿಧಾನಸಭೆ, ವಿಧಾನ ಪರಿಷತ್ತಿನಲ್ಲಿ ಸರ್ಕಾರದ ಮುಖ್ಯ ಸಚೇತಕನೆಂದು ಮುಖ್ಯಮಂತ್ರಿಗಳು ನಾಮನಿರ್ದೇಶನ ಮಾಡಿದ ವಿಧಾನ ಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯ;

(ಸಿ) ರೈಲು ಪ್ರಯಾಣಗಳಿಗೆ ಸಂಬಂಧಿಸಿದಂತೆ 'ಅತ್ಯುನ್ನತ ದರ್ಜೆ' ಎಂಬುದು ರೈಲಿನಲ್ಲಿ ಲಭ್ಯವಿರುವ ಹವಾನಿಯಂತ್ರಿತ ಸ್ಥಳಾವಕಾಶವನ್ನು ಒಳಗೊಳ್ಳುತ್ತದೆ;

(ಸಿಸಿ) 'ವಿರೋಧ ಪಕ್ಷದ ನಾಯಕ' ಎಂದರೆ, ಸಂದರ್ಭಾನುಸಾರ ಸಭಾಧ್ಯಕ್ಷ ಅಥವಾ ಸಭಾಪತಿ, ವಿರೋಧ ಪಕ್ಷದ ನಾಯಕ ಎಂದು ತತ್ಕಾಲದಲ್ಲಿ ಮನ್ನಣೆ ನೀಡಿದ ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯ;

(ಸಿಸಿಸಿ) **'ವಿರೋಧ ಪಕ್ಷದ ಸಚೇತಕ'** ಎಂದರೆ ವಿಧಾನಸಭೆ ಅಥವಾ ಸಂದರ್ಭಾನುಸಾರ ವಿಧಾನಪರಿಷತ್ತಿನಲ್ಲಿ ವಿರೋಧಪಕ್ಷದ ಮುಖ್ಯ ಸಚೇತಕ ಎಂದು ವಿರೋಧಪಕ್ಷದ ನಾಯಕರಿಂದ ಹಾಗೆ ಪದನಾಮೀಕರಿಸಿದ ವಿಧಾನಸಭೆ ಅಥವಾ ವಿಧಾನಪರಿಷತ್ತಿನ ಸದಸ್ಯರು;

(ಡಿ) 'ನಿಯಮಿಸಲಾದುದು' ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು;

**xx xx xx**

**11ಎ. ಸದಸ್ಯರಿಗೆ ನಿವೃತ್ತಿ ವೇತನ ಇತ್ಯಾದಿ.–** (1) ಕರ್ನಾಟಕ ವಿಧಾನ ಮಂಡಲ ಸಂಬಳಗಳ (ತಿದ್ದುಪಡಿ) ಅಧಿನಿಯಮ, 1978ರ 1ನೇ ಪ್ರಕರಣವು ಪ್ರಾರಂಭವಾದ ದಿನಾಂಕದಿಂದ ಜಾರಿಗೆ ಬರುವಂತೆ ಈ ಕೆಳಕಂಡ ಪ್ರತಿಯೊಬ್ಬ ವ್ಯಕ್ತಿ, ಎಂದರೆ,–

(ಎ) 1952ರ ಜನವರಿ ಮೊದಲನೇ ದಿನದ ತರುವಾಯ,–

(i) ವಿಧಾನ ಪರಿಷತ್‌ನ ಸದಸ್ಯನಾಗಿ; ಅಥವಾ

(ii) ವಿಧಾನಸಭಾ ಸದಸ್ಯನಾಗಿ; ಅಥವಾ

(iii) ವಿಧಾನಸಭಾ ಸದಸ್ಯನಾಗಿ ಭಾಗಶಃ ಮತ್ತು ವಿಧಾನ ಪರಿಷತ್‌ನ ಸದಸ್ಯನಾಗಿ ಭಾಗಶಃ, –ಸೇವೆ ಸಲ್ಲಿಸಿರುವವನಿಗೆ ಅವನ ಜೀವಿತದ ಉಳಿದ ಅವಧಿಗೆ ಪ್ರತಿ ತಿಂಗಳು ಹದಿನೈದು ಸಾವಿರ ರೂಪಾಯಿಗಳ ನಿವೃತ್ತಿ ವೇತನ ಸಂದಾಯವಾಗತಕ್ಕದ್ದು:

ಪರಂತು, ಯಾವೊಬ್ಬ ವ್ಯಕ್ತಿಯು ಐದು ವರ್ಷಗಳಿಗಿಂತ ಹೆಚ್ಚು ಸೇವೆ ಸಲ್ಲಿಸಿದ್ದಲ್ಲಿ, ಆತನಿಗೆ ತದನಂತರ ಮುಂದುವರೆದ ಪ್ರತಿಯೊಂದು ವರ್ಷಕ್ಕೆ ಪ್ರತಿ ತಿಂಗಳು ಒಂದು ಸಾವಿರ ರೂಪಾಯಿಗಳ ದರದಲ್ಲಿ ಹೆಚ್ಚುವರಿ ನಿವೃತ್ತಿ ವೇತನವನ್ನು ನೀಡತಕ್ಕದ್ದು, ಆದಾಗ್ಯೂ ಈ ಪ್ರಕರಣದ ಅಡಿಯಲ್ಲಿ ನೀಡುವ ನಿವೃತ್ತಿ ವೇತನದ ಒಟ್ಟು ಮೊತ್ತವು ತಿಂಗಳಿಗೆ ಇಪ್ಪತ್ತೈದು ಸಾವಿರ ರೂಪಾಯಿಗಳನ್ನು ಮೀರತಕ್ಕದ್ದಲ್ಲ:

ಮತ್ತೂ ಪರಂತು, ವಿಧಾನ ಸಭೆಯ ವಿಸರ್ಜನೆಯ ಕಾರಣದಿಂದಾಗಿ ಐದು ವರ್ಷಗಳು ಸೇವೆ ಸಲ್ಲಿಸದಂತೆ ಒಬ್ಬ ಸದಸ್ಯನು ಪ್ರತಿಬಂಧಿತನಾಗಿದ್ದರೆ, ಅವನು ಸದಸ್ಯನಾಗಿ ಐದು ವರ್ಷ ಸೇವೆ ಸಲ್ಲಿಸಿರುವುದಾಗಿ ಭಾವಿಸತಕ್ಕದ್ದು:

ಅಲ್ಲದೆ ಪರಂತು, ಒಬ್ಬ ವ್ಯಕ್ತಿಯು ಮೊದಲು ವಿಧಾನ ಪರಿಷತ್ತಿನ ಸದಸ್ಯನಾಗಿದ್ದು ಅವನು ತನ್ನ ಆರು ವರ್ಷಗಳ ಪೂರ್ಣ ಅಧಿಕಾರಾವಧಿಯ ಸೇವೆ ಸಲ್ಲಿಸುವ ಮೊದಲೇ ಚೀಟಿ ಮೂಲಕ ಅವನ ಅಧಿಕಾರಾವಧಿ ಮುಕ್ತಾಯವಾಗಿದ್ದರೆ, ಅವನು ಧಾರಣ ಮಾಡಿದ್ದ ಅಧಿಕಾರದ ಅವಧಿಯನ್ನು ಗಣನೆಗೆ ತೆಗೆದುಕೊಳ್ಳದೆ ಅವನು ಐದು ವರ್ಷಗಳ ಸೇವೆ ಸಲ್ಲಿಸಿರುವುದಾಗಿ ಭಾವಿಸತಕ್ಕದ್ದು:

ಅಲ್ಲದೇ ಪರಂತು, ಒಬ್ಬ ವ್ಯಕ್ತಿಯು, ಒಂದು ಚುನಾವಣಾ ಅರ್ಜಿಯ ವಿಚಾರಣೆಯಲ್ಲಿ ನ್ಯಾಯಾಲಯದಿಂದ, ಚುನಾಯಿತರಾಗಿರುವನೆಂದು ಘೋಷಿಸ್ಪಟ್ಟಿದ್ದರೆ ಮತ್ತು ಚುನಾವಣಾ ತಕರಾರು ಅರ್ಜಿಯು ಇತ್ಯರ್ಥದಲ್ಲಿರುವ ಸಮಯದಲ್ಲಿ ಅವರು ಸದಸ್ಯರೆಂಬುದಾಗಿ ಸೇವೆ ಸಲ್ಲಿಸಲು ಅಸಮರ್ಥರಾಗಿದ್ದಾಗ, ಅವರು ವಾಸ್ತವವಾಗಿ ಸಲ್ಲಿಸದ ಸೇವೆಯ ಅವಧಿಯನ್ನು ಗಣನೆಗೆ ತೆಗೆದುಕೊಳ್ಳದೇ ಐದು ವರ್ಷಗಳ ಅವಧಿಯ ಸೇವೆ ಸಲ್ಲಿಸಿರುವನೆಂಬುದಾಗಿ ಭಾವಿಸತಕ್ಕದ್ದು ;

ಅಲ್ಲದೆ ಪರಂತು, ಒಬ್ಬ ವ್ಯಕ್ತಿಯು, ಉಪ–ಚುನಾವಣೆಯಲ್ಲಿ ಚುನಾಯಿತನಾಗಿರುವನೆಂದು ಘೋಷಿತನಾಗಿದ್ದರೆ ಅಥವಾ ಅಧಿಕಾರಾವಧಿಯ ಮಧ್ಯದಲ್ಲಿ ಸದಸ್ಯನೆಂದು ನಾಮನಿರ್ದೇಶನಗೊಂಡಿದ್ದರೆ ಮತ್ತು ಅವನಿಗೆ ಪೂರ್ಣಾವಧಿ ಸೇವೆ ಸಲ್ಲಿಸಲು ಸಾಧ್ಯವಾಗದಿದ್ದರೆ ಅವನು ವಾಸ್ತವವಾಗಿ ಸಲ್ಲಿಸಿದ ಸೇವೆಯನ್ನು ಗಣನೆಗೆ ತೆಗೆದುಕೊಳ್ಳದೆ ಐದು ವರ್ಷಗಳ ಸೇವೆ ಸಲ್ಲಿಸಿರುವುದಾಗಿ ಭಾವಿಸತಕ್ಕದ್ದು:

ಅಲ್ಲದೇ ಪರಂತು, ಒಬ್ಬ ಸದಸ್ಯನು ರಾಜೀನಾಮೆ ಸಲ್ಲಿಸಿದರೆ, ಅವನು ಸದಸ್ಯನಾಗಿ ಐದು ವರ್ಷಗಳವರೆಗೆ ಸೇವೆ ಸಲ್ಲಿಸಿರುವುದಾಗಿ ಭಾವಿಸತಕ್ಕದ್ದು.

**ವಿವರಣೆ:–** ಈ ಉಪ–ಪ್ರಕರಣದ ಉದ್ದೇಶಕ್ಕಾಗಿ, ವಿಧಾನಸಭೆ ಅಥವಾ ವಿಧಾನ ಪರಿಷತ್‌ನ ಸದಸ್ಯ ಎಂದರೆ, 1956ರ ನವೆಂಬರ್ ಒಂದನೇ ದಿನಾಂಕಕ್ಕೆ ಮೊದಲು ಒಬ್ಬ ವ್ಯಕ್ತಿಯು, ಸದರಿ ದಿನಾಂಕದಂದು ಮತ್ತು ಆ ತರುವಾಯ ನವ ಕರ್ನಾಟಕ ರಾಜ್ಯದ ಒಂದು ಭಾಗವಾಗಿ ಸೇರಿದ ಯಾವುದೇ ಪ್ರದೇಶವನ್ನು, ಸದರಿ ಪ್ರದೇಶವು ಆ ಹಿಂದೆ ತನ್ನ ಒಂದು ಭಾಗವಾಗಿದ್ದ ರಾಜ್ಯದ ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯನಾಗಿ ಪ್ರತಿನಿಧಿಸಿದ್ದರೆ ಆತನನ್ನೂ ಒಳಗೊಳ್ಳುತ್ತದೆ:

ಪರಂತು, ವಿಧಾನ ಸಭೆ ಅಥವಾ ವಿಧಾನ ಪರಿಷತ್ತಿನ ನಾಮನಿರ್ದೇಶಿತ ಸದಸ್ಯನ ಸಂದರ್ಭದಲ್ಲಿ, ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಅವನ ಸದಸ್ಯತ್ವದ ಅವಧಿಯಲ್ಲಿ ಅವನು ಖಾಯಂ ಆಗಿ ಕರ್ನಾಟಕ ರಾಜ್ಯದ ಭಾಗವಾಗುವ ಯಾವುದೇ ಪ್ರದೇಶದಲ್ಲಿ ವಾಸವಾಗಿದ್ದರೆ ನಿವೃತ್ತಿ ವೇತನಕ್ಕೆ ಅರ್ಹನಾಗತಕ್ಕದ್ದು.

**xx xx xx**

(5) **xx xx xx**

(5) (1)ನೇ ಉಪಪ್ರಕರಣದ (ಎ) ಮತ್ತು (ಬಿ) ಖಂಡದ ಮೇರೆಗೆ ನಿವೃತ್ತಿ ವೇತನಕ್ಕೆ ಹಕ್ಕುಳ್ಳವನಾದ ಪ್ರತಿಯೊಬ್ಬ ಸದಸ್ಯನಿಗೆ,–

(i) **xx xx xx**

(ii) ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ಆತನು ಭಾರತದಲ್ಲಿ ರೈಲ್ವೆ ಮೂಲಕ ಮೊದಲನೇ ದರ್ಜೆ/ಎರಡನೇ ದರ್ಜೆ ಎಸಿಯಲ್ಲಿ ಒಂದು ವರ್ಷಕ್ಕೆ ಗರಿಷ್ಠ 35000 ಕಿಮೀ.ಗಳ ದೂರ ಪ್ರಯಾಣಿಸಲು ವಾಸ್ತವಿಕ ಪ್ರಯಾಣದ ವೆಚ್ಚಗಳ ಮರುಪಾವತಿಗೆ ಅರ್ಹನಾಗಿರತಕ್ಕದ್ದು.

**11ಬಿ. ಕುಟುಂಬ ನಿವೃತ್ತಿ ವೇತನ.–** (1) ಸದಸ್ಯರೊಬ್ಬರು ತಮ್ಮ ಪದಾವಧಿಯು ಮುಕ್ತಾಯವಾಗುವುದಕ್ಕೆ ಮುನ್ನವೇ ಮರಣ ಹೊಂದಿದಲ್ಲಿ, ಅಥವಾ 11ಎ ಪ್ರಕರಣದಡಿಯಲ್ಲಿ ನಿವೃತ್ತಿ ವೇತನಕ್ಕೆ ಅರ್ಹರಾದ ಒಬ್ಬ ವ್ಯಕ್ತಿಯು ಮೃತರಾದಲ್ಲಿ, 11ಎ ಪ್ರಕರಣದಡಿಯಲ್ಲಿ ಪ್ರತಿ ತಿಂಗಳಿಗೆ ದೊರೆಯತಕ್ಕ ನಿವೃತ್ತಿ ವೇತನದ ಶೇಕಡಾ ಐವತ್ತರ ದರದಲ್ಲಿ ಕುಟುಂಬ ನಿವೃತ್ತಿ ವೇತನವನ್ನು ಆತನ ಕುಟುಂಬಕ್ಕೆ ಸಂದಾಯ ಮಾಡತಕ್ಕದ್ದು.

**xx xx xx**

**12. ವಿಧಾನಸಭಾ ಸದಸ್ಯರು ಮತ್ತು ವಿಧಾನ ಪರಿಷತ್‌ನ ಸದಸ್ಯರು – ಇವರಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಗಳು ಮತ್ತು ವೈದ್ಯಕೀಯ ಮತ್ತು ಇತರೆ ಸೌಲಭ್ಯಗಳು.–** ಈ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳ ಮೂಲಕ ನಿರ್ಧರಿಸಲಾದಂಥ ಷರತ್ತುಗಳಿಗೆ ಒಳಪಟ್ಟು,–

**xx xx xx**

(ಸಿ) ಪ್ರತಿಯೊಬ್ಬ ಸದಸ್ಯ ಮತ್ತು ಅವನೊಂದಿಗೆ ವಾಸಿಸುವ ಅಥವಾ ಅವಲಂಬಿತರಾದ ಅವನ ಕುಟುಂಬದ ಸದಸ್ಯರು,–

(i) ರಾಜ್ಯ ಸರ್ಕಾರವು ನಿರ್ವಹಿಸಿಕೊಂಡು ಬರುವ ಆಸ್ಪತ್ರೆ ಅಥವಾ ಔಷಧಾಲಯದಲ್ಲಿ ಅಥವಾ ಕರ್ನಾಟಕ ವಿಧಾನ ಮಂಡಲವು ಅಧಿಸೂಚಿಸಿದ ಆಸ್ಪತ್ರೆ ಅಥವಾ ಔಷಧಾಲಯಗಳಲ್ಲಿ ನಿಯಮಿಸಬಹುದಾದಂಥ ಸ್ಥಳಾವಕಾಶ ಹಾಗೂ ನಿಯಮಿಸಬಹುದಾದಂಥ ವೈದ್ಯಕೀಯ ತಪಾಸಣೆ ಮತ್ತು ಚಿಕಿತ್ಸೆಯನ್ನು ಉಚಿತವಾಗಿ ಪಡೆದುಕೊಳ್ಳಲು;

**xx xx xx**

**13. ಸಚಿವ ರಾಜ್ಯ ಸಚಿವ, ಉಪ–ಸಚಿವ, ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕ ಇವರು ಸದಸ್ಯರಾಗಿ ಸಂಬಳ ಪಡೆಯದಿರುವುದು.–** (1) ಸಚಿವ, ರಾಜ್ಯ ಸಚಿವ, ಉಪಸಚಿವ, ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ಅಥವಾ ವಿರೋಧ ಪಕ್ಷದ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕರು ತಮ್ಮ ಅಧಿಕಾರ ಸ್ಥಾನದ ಸಂಬಳ ಮತ್ತು ಭತ್ಯಗಳನ್ನು ಪಡೆಯುತ್ತಿರುವಾಗ ಸಂದರ್ಭಾನುಸಾರ ನಾಯಕರು ಮತ್ತು ಸರ್ಕಾರಿ ಮುಖ್ಯ ಸಚೇತಕರು ತಮ್ಮ ಅಧಿಕಾರ ಸ್ಥಾನದ ಸಂಬಳ ಮತ್ತು ಭತ್ಯಗಳನ್ನು ಪಡೆಯುತ್ತಿರುವಾಗ ಸಂದರ್ಭಾನುಸಾರ ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯನಾಗಿ ಯಾವುದೇ ಸಂಬಳ ಅಥವಾ ಭತ್ಯವನ್ನು ಪಡೆಯಲು ಹಕ್ಕುಳ್ಳವನಾಗಿರತಕ್ಕದ್ದಲ್ಲ:

ಪರಂತು, 10ಬಿ ಪ್ರಕರಣದ ಮೇರೆಗೆ ಒದಗಿಸಲಾದ ಸೌಲಭ್ಯವನ್ನು ಪಡೆದುಕೊಳ್ಳದ ಉಪ–ಸಭಾಪತಿ ಅಥವಾ ಉಪ–ಸಭಾಧ್ಯಕ್ಷನು 12ನೇ ಪ್ರಕರಣದ (ಎ) ಮತ್ತು (ಬಿ) ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ಭತ್ಯಗಳನ್ನು ಸಂದರ್ಭಾನುಸಾರ, ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯನಾಗಿ ಪಡೆದುಕೊಳ್ಳಲು ಹಕ್ಕುಳ್ಳವನಾಗಿರತಕ್ಕದ್ದು.

ಮತ್ತೂ ಪರಂತು, ಅವನು ಸಂದರ್ಭಾನುಸಾರ 8ನೇ ಪ್ರಕರಣದ ಮೇರೆಗೆ ಅಥವಾ 12ನೇ ಪ್ರಕರಣದ (ಎಫ್) ಖಂಡದ ಮೇರೆಗೆ ಅನ್ವಯಿಸುವ ಭತ್ಯಗಳಿಗೆ ಸಹ ಹಕ್ಕುಳ್ಳವರಾಗಿರತಕ್ಕದ್ದು.

(1ಎ) (1)ನೇ ಉಪ–ಪ್ರಕರಣದಲ್ಲಿ ಏನೇ ಇದ್ದರೂ, ಸಂದರ್ಭಾನುಸಾರ 10ಎಫ್ ಪ್ರಕರಣದಲ್ಲಿ ಅಥವಾ 10ನೇ ಪ್ರಕರಣದಲ್ಲಿ ಒದಗಿಸಲಾದ ಸೌಲಭ್ಯವನ್ನು ಪಡೆದುಕೊಳ್ಳದಿರುವ ವಿರೋಧ ಪಕ್ಷದ ನಾಯಕ ಅಥವಾ ಸರ್ಕಾರಿ ಮುಖ್ಯ ಸಚೇತಕನು ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯನಾಗಿ ಅಥವಾ ವಿಧಾನ ಸಭೆ ಅಥವಾ ವಿಧಾನ ಪರಿಷತ್ತು ಅಥವಾ ಅವೆರಡರ ಯಾವುದೇ ಸಮಿತಿಯ ಅಧ್ಯಕ್ಷರಾಗಿ 12ನೇ ಪ್ರಕರಣದ (ಎ), (ಬಿ), (ಸಿ) ಮತ್ತು (ಎಫ್) ಖಂಡಗಳಲ್ಲಿ ನಿರ್ದಿಷ್ಟಪಡಿಸಲಾದ ಭತ್ಯಗಳಿಗೆ ಹಕ್ಕುಳ್ಳವರಾಗಿರತಕ್ಕದ್ದು.

(2) ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಅಥವಾ ಸರ್ಕಾರಿ ಮುಖ್ಯ ಸಚೇತಕ ಇವರು ತಮ್ಮ ಅಧಿಕಾರದ ಅವಧಿಯಲ್ಲಿ, ಸಂದರ್ಭಾನುಸಾರ ಸಭಾಪತಿ, ಉಪ–ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಅಥವಾ ಸರ್ಕಾರಿ ಮುಖ್ಯ ಸಚೇತಕನಾಗಿ ತನ್ನ ಕರ್ತವ್ಯದ ಹೊರತಾದ ಯಾವುದೇ ವೃತ್ತಿ ನಡೆಸತಕ್ಕದ್ದಲ್ಲ ಅಥವಾ ಯಾವುದೇ ವ್ಯಾಪಾರದಲ್ಲಿ ನಿರತನಾಗತಕ್ಕದ್ದಲ್ಲ ಅಥವಾ ಪರಿಶ್ರಮಧನ ಪಡೆಯಲು ಇತರ ಯಾವುದೇ ಉದ್ಯೋಗವನ್ನು ಮಾಡತಕ್ಕದ್ದಲ್ಲ.

**13ಎ. ಮೋಟಾರು ಕಾರುಗಳು ಮತ್ತು ಮೋಟಾರು ಸೈಕಲ್‌ಗಳ ಖರೀದಿಗಾಗಿ ಮುಂಗಡಗಳ ಮಂಜೂರಾತಿ.–** ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಪ್ರತಿಯೊಬ್ಬ ಸದಸ್ಯನು ಮೋಟಾರು ಕಾರು ಅಥವಾ ಮೋಟಾರು ಸೈಕಲ್ ಖರೀದಿಗಾಗಿ ಮುಂಗಡ ಮಂಜೂರಾತಿಗೆ ಹಕ್ಕುಳ್ಳವರಾಗಿರತಕ್ಕದ್ದು.

**13ಬಿ. ಬಾಕಿಗಳ ವಸೂಲಿ.–** ವಿಧಾನ ಮಂಡಲದ ಸದಸ್ಯನಾಗಿರುವ ಅಥವಾ ಸದಸ್ಯನಾಗಿದ್ದ ವ್ಯಕ್ತಿಯಿಂದ ಸರ್ಕಾರ ಅಥವಾ ವಿಧಾನ ಮಂಡಲದ ಸಚಿವಾಲಯಕ್ಕೆ ಬಾಕಿ ಇರುವ ಯಾವುದೇ ಮೊತ್ತದ ವಸೂಲಿಯ ಯಾವುದೇ ಇತರೆ ವಿಧಾನಕ್ಕೆ ಬಾಧಕವಿಲ್ಲದಂತೆ,–

(ಎ) 11ನೇ ಪ್ರಕರಣದ ಮೇರೆಗೆ ಸಂದಾಯವಾಗತಕ್ಕ ಆತನ ಸಂಬಳದಿಂದ;

(ಬಿ) 11ಎ ಪ್ರಕರಣದ ಮೇರೆಗೆ ಸಂದಾಯವಾಗತಕ್ಕ ಆತನ ನಿವೃತ್ತಿ ವೇತನದಿಂದ;

(ಸಿ) ಅದು ಭೂಕಂದಾಯದ ಬಾಕಿ ಆಗಿದ್ದರೆ ಹೇಗೋ ಹಾಗೆ

– ವಸೂಲಿ ಮಾಡಬಹುದು.

**ವಿವರಣೆ:–** ಈ ಪ್ರಕರಣದ ಉದ್ದೇಶಕ್ಕಾಗಿ ವಿಧಾನ ಮಂಡಲದ ಸದಸ್ಯ ಎಂಬ ಪದವು ಸಚಿವ, ರಾಜ್ಯ ಸಚಿವ, ಉಪ–ಸಚಿವ, ಸಭಾಪತಿ, ಸಭಾಧ್ಯಕ್ಷ, ಉಪ–ಸಭಾಧ್ಯಕ್ಷ, ವಿರೋಧ ಪಕ್ಷದ ನಾಯಕ ಮತ್ತು ಸರ್ಕಾರಿ ಮುಖ್ಯ ಸಚೇತಕ – ಇವರುಗಳನ್ನು ಒಳಗೊಳ್ಳುತ್ತದೆ.

**13ಸಿ. ಕ್ಷೇಮಾಭಿವೃದ್ಧಿ ನಿಧಿಯ ಸ್ಥಾಪನೆ.–** (1) ಕರ್ನಾಟಕ ಶಾಸಕರ ಕ್ಷೇಮಾಭಿವೃದ್ಧಿ ನಿಧಿ (ಇದರಲ್ಲಿ ಇನ್ನು ಮುಂದೆ ನಿಧಿ ಎಂದು ಉಲ್ಲೇಖಿಸಲಾಗಿದೆ) ಎಂದು ಕರೆಯಲಾಗುವ ಒಂದು ನಿಧಿಯು ಸ್ಥಾಪಿತವಾಗತಕ್ಕದ್ದು.

(2) (1)ನೇ ಉಪ–ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ನಿಧಿಯು,–

(ಎ) ಕರ್ನಾಟಕ ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಯಾರೇ ಸದಸ್ಯ ಅಥವಾ ಮಾಜಿ ಸದಸ್ಯರು ನೀಡಬಹುದಾದಂಥ ಮೊಬಲಗು;

(ಬಿ) ಸರ್ಕಾರ ಅಥವಾ ಯಾರೇ ಇತರ ವ್ಯಕ್ತಿಗಳಿಂದ ನಿಧಿಗೆ ಕಾಣಿಕೆ ಅಥವಾ ದಾನ ಅಥವಾ ದೇಣಿಗೆಯಾಗಿ ನೀಡಬಹುದಾದಂಥ ಮೊಬಲಗು;

(ಸಿ) ಸದರಿ ನಿಧಿಯಲ್ಲಿನ ಮೊಬಲಗಿನ ಮೇಲೆ ಗಳಿಸಲಾದ ಬಡ್ಡಿ

– ಇವುಗಳನ್ನು ಒಳಗೊಂಡಿರತಕ್ಕದ್ದು.

(3) ನಿಧಿಯನ್ನು ಕರ್ನಾಟಕ ಶಾಸಕರ ಕ್ಷೇಮಾಭಿವೃದ್ಧಿ ನಿಧಿ ಪ್ರಾಧಿಕಾರ ಎಂದು ಕರೆಯಲಾಗುವ ಪ್ರಾಧಿಕಾರವು ನಿಯಮಿಸಬಹುದಾದಂಥ ನಿಯಮಗಳಿಗೆ ಅನುಸಾರವಾಗಿ ಪ್ರವರ್ತಿಸತಕ್ಕದ್ದು ಅಥವಾ ಆಡಳಿತ ನಡೆಸತಕ್ಕದ್ದು ಅಥವಾ ನಿರ್ವಹಿಸತಕ್ಕದ್ದು.

(4) ಕರ್ನಾಟಕ ವಿಧಾನ ಸಭೆಯ ಕ್ಷೇಮಾಭಿವೃದ್ಧಿ ನಿಧಿ ಪ್ರಾಧಿಕಾರವು ಈ ಮುಂದಿನದನ್ನು ಒಳಗೊಂಡಿರತಕ್ಕದ್ದು, ಎಂದರೆ,–

| | | |
|---|---|---|
| (ಎ) | ಸಭಾಧ್ಯಕ್ಷ, ಕರ್ನಾಟಕ ವಿಧಾನಸಭೆ | ಅಧ್ಯಕ್ಷರು |
| (ಬಿ) | ಸಂಸದೀಯ ವ್ಯವಹಾರಗಳ ಪ್ರಭಾರದಲ್ಲಿರುವ ಸಚಿವರು ಕರ್ನಾಟಕ ಸರ್ಕಾರ | ಸದಸ್ಯರು |
| (ಸಿ) | ವಿಧಾನ ಸಭೆಯ ವಿರೋಧ ಪಕ್ಷದ ನಾಯಕ | ಸದಸ್ಯರು |
| (ಡಿ) | ಕರ್ನಾಟಕ ವಿಧಾನಸಭೆಯ ಕಾರ್ಯದರ್ಶಿಯು, ಪ್ರಾಧಿಕಾರದ ಕಾರ್ಯದರ್ಶಿಯಾಗಿರತಕ್ಕದ್ದು | |

(4ಎ) ಕರ್ನಾಟಕ ವಿಧಾನ ಪರಿಷತ್ತಿನ ಕ್ಷೇಮಾಭಿವೃದ್ಧಿ ನಿಧಿ ಪ್ರಾಧಿಕಾರವು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು, ಎಂದರೆ,–

| | | |
|---|---|---|
| (ಎ) | ಸಭಾಪತಿ, ಕರ್ನಾಟಕ ವಿಧಾನ ಪರಿಷತ್ತು | ಅಧ್ಯಕ್ಷರು |
| (ಬಿ) | ಸಂಸದೀಯ ವ್ಯವಹಾರಗಳ ಪ್ರಭಾರದಲ್ಲಿರುವ ಸಚಿವರು ಕರ್ನಾಟಕ ಸರ್ಕಾರ | ಸದಸ್ಯರು |
| (ಸಿ) | ವಿಧಾನ ಸಭೆಯ ವಿರೋಧ ಪಕ್ಷದ ನಾಯಕ | ಸದಸ್ಯರು |
| (ಡಿ) | ಕರ್ನಾಟಕ ವಿಧಾನಸಭೆಯ ಕಾರ್ಯದರ್ಶಿಯು, ಪ್ರಾಧಿಕಾರದ ಕಾರ್ಯದರ್ಶಿಯಾಗಿರತಕ್ಕದ್ದು | |

(5) ಸದರಿ ನಿಧಿಯಲ್ಲಿ ಜಮೆ ಇರುವ ಮೊತ್ತವನ್ನು ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ಈ ಕೆಳಕಂಡ ವ್ಯಕ್ತಿಗಳ ಪ್ರಯೋಜನಕ್ಕಾಗಿ ಅಥವಾ ಕಲ್ಯಾಣಕ್ಕಾಗಿ ಅನ್ವಯಿಸತಕ್ಕದ್ದು ಅಥವಾ ತೊಡಗಿಸತಕ್ಕದ್ದು ಅಥವಾ ಖರ್ಚು ಮಾಡತಕ್ಕದ್ದು,–

(i) 11ಎ ಪ್ರಕರಣದ ಮೇರೆಗೆ ನಿವೃತ್ತಿ ವೇತನಕ್ಕೆ ಹಕ್ಕುದಾರರಾದ ವ್ಯಕ್ತಿಗಳು;

(ii) ವಿಧಾನಸಭೆ ಅಥವಾ ವಿಧಾನ ಪರಿಷತ್ತಿನ ಸದಸ್ಯರಾಗಿ ಸೇವೆ ಸಲ್ಲಿಸುತ್ತಿರುವಾಗ ಮೃತರಾದ ವ್ಯಕ್ತಿಗಳ ಕುಟುಂಬ;

(iii) (i)ನೇ ಖಂಡದಲ್ಲಿ ಉಲ್ಲೇಖಿಸಲಾದ ವ್ಯಕ್ತಿಗಳ ಮರಣದ ತರುವಾಯ ಅವರ ಕುಟುಂಬ;

**ಟಿಪ್ಪಣಿ:–** ಈ ಪ್ರಕರಣದ ಉದ್ದೇಶಕ್ಕಾಗಿ ಕುಟುಂಬ ಎಂದರೆ, 11ಬಿ ಪ್ರಕರಣದ (1)ನೇ ಉಪ–ಪ್ರಕರಣದ ವಿವರಣೆಯಲ್ಲಿ ಅದಕ್ಕೆ ನೀಡಲಾಗಿರುವ ಅದೇ ಅರ್ಥವನ್ನು ಹೊಂದಿರತಕ್ಕದ್ದು.

**xx xx xx**

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY

### THIRTEENTH SESSION

## THE KARNATAKA LEGISLATURE SALARIES, PENSIONS AND ALLOWANCES (AMENDMENT) BILL, 2012

### (L.A. Bill No. 9 of 2012)

A Bill further to amend the Karnataka Legislature Salaries, Pensions and Allowances Act, 1956.

Whereas it is expedient further to amend the Karnataka Legislature Salaries, Pensions and Allowances Act, 1956 (Karnataka Act 2 of 1957) for the purposes hereinafter appearing;

Be it enacted by the Karnataka State Legislature in the sixty-third year of the Republic of India, as follows:-

**1. Short title and commencement.-** (1) This Act may be called the Karnataka Legislature Salaries, Pensions and Allowances (Amendment) Act, 2012.

(2) It shall come into force at once.

**2. Amendment of section 2.-** In the Karnataka Legislature Salaries, Pensions and Allowances Act, 1956 (Karnataka Act 2 of 1957) (hereinafter referred to as the principal Act), in section 2, after clause (d), the following shall be inserted, namely:-

"(dd) 'recognised group' means,-

(i) in relation to the Karnataka Legislative Council, every party which has a strength of not less than 10 members i.e., the quorum strength of members in the Legislative Council;

(ii) in relation to the Karnataka Legislative Assembly, every party which has a strength of not less than twenty three members i.e., the quorum strength of the Legislative Assembly."

**3. Amendment of section 11A.-** In section 11A of the principal Act,-

(1) in sub-section (1), for the words "fifteen thousand", the words "twenty-five thousand" and for the words "twenty-five thousand", the words "thirty-five thousand" shall be substituted.

(2) in sub-section (5), for clause (ii), the following shall be substituted, namely:-

"(ii) shall be entitled to reimbursement of actual travel expenses to a maximum of Rupees One Lakh per annum for self alongwith his one companion in first class/second class A/c for journeys by train in India subject to such rules as may be prescribed."

**4. Amendment of section 11B.-** In section 11B of the principal Act, in sub-section (1), for the words "pension admissible", the words "pension drawn" shall be substituted.

**5. Amendment of section 12.-** In section 12 of the principal Act, in clause (c), after sub-clause (ii), the following shall be inserted, namely:-

"(iii) every ex-member who is in receipt of the pension under section 11A shall be entitled to fixed medical allowance of rupees two thousand per month, subject to the condition that the said amount shall be deducted in the medical reimbursement claim if any during the said month."

**6. Insertion of new section 13D.-** After section 13C of the principal Act, the following shall be inserted, namely:-

"**13D. Facilities to the recognised groups.-** (1) The recognised group shall be entitled to telephone and such secretarial facilities as may be prescribed in this behalf:

Provided that such facilities shall not be provided to such Leader or Deputy Leader as the case may be, who,-

(i) is provided with similar telephone and secretarial facilities by virtue of holding any office of, or representation in a Legislature Committee or other Committee, Council, Board, Commission or other body established by the Government; or

(ii) is provided with similar telephone and secretarial facilities in any other capacity by the Government or a local authority or a Corporation owned or controlled by the Government or any local authority.

(2) The facilities admissible under sub-section (1) shall be co-terminus with the term of the Leader or Deputy Leader as the case may be of the recognised group."

**STATEMENT OF OBJECTS AND REASONS**

It is considered necessary to amend the Karnataka Legislature Salaries, Pensions and Allowances Act, 1956 (Karnataka Act 2 of 1957),-

(a) to define the term recognized group and to provide telephone and such other Secretarial facilities to the office of the recognized groups;

(b) to enhance the pension payable to a member from Rs. 15,000/- to 25,000/- p.m. and to enhance the upper limit of pension from Rs.25,000/- to Rs. 35,000/- p.m.;

(c) to grant medical allowance of Rs.2,000/- (Rupees two thousand only) per month; and

(d) for reimbursement of actual travel expenses by train in India subject to a maximum of Rupees One Lakh per annum to ex-members, who are in receipt of pension.

Hence the Bill.

**FINANCIAL MEMORANDUM**

A sum of Rs.1743.16 lakhs per annum is probable expenditure from the proposed amendment.

**MEMORANDUM REGARDING DELEGATED LEGISLATION**

**CLAUSE 3 :** Sub-clause (2) empowers the Special Board to prescribe by rules the manner of reimbursement of the actual travel expenses to the member who is entitled to pension for journeys by train.

The proposed delegation of legislative power is of normal in character.

**S.SURESH KUMAR**
Minister for Urban Development,
Law and Parliamentary Affairs

**P. OMPRAKASHA**
Secretary
Karnataka Legislative Assembly

**ANNEXURE**

Extract from the Karnataka Legislature Salaries, Pensions and Allowances Act, 1956 (Karnataka Act 2 of 1957)

xx xx xx

**2. Definitions.-** In this Act, unless the context otherwise requires,—

(a) 'Chairman' means the Chairman of the Legislative Council;

(b) 'Deputy Chairman' means the Deputy Chairman of the Legislative Council;

(bb) 'Government Chief Whip' means a member of the Legislative Assembly or the Legislative Council designated by the Chief Minister as the Government Chief Whip in the Legislative Assembly or the Legislative Council;

(c) 'highest class' in relation to journeys by train includes air-conditioned accommodation available in the train;

(cc) 'Leader of the Opposition' means the member of the Legislative Assembly or the Legislative Council who is for the time being recognised as the Leader of the Opposition by the Speaker or the Chairman as the case may be;

(ccc) 'Opposition Chief Whip' means a member of the Legislative Assembly or the Legislative Council designated as such by the Leader of the Opposition as the Opposition Chief Whip in the Legislative Assembly or the Legislative Council as the case may be.

(d) 'prescribed' means prescribed by rules made under this Act;

xx xx xx

**11A. Pension to the members etc.-** (1) With effect from the date of commencement of the Karnataka Legislature Salaries, Pensions and Allowances (Amendment) Act, 2009 there shall be paid to every person who has served for a period of five years as,-

(i) a member of the Legislative Council; or

(ii) a member of the Legislative Assembly; or

(iii) partly as a member of the Legislative Assembly and partly as a member of the Legislative Council,
a pension at the rate of fifteen thousand rupees per mensum for the remainder of his life:

Provided further that service as such member for a part of the year exceeding six months shall be treated as a full year for the purpose of calculating additional pension:

Provided also that where a member has been prevented from serving as such for five years on account of dissolution of the Legislative Assembly, he shall be deemed to have served as member for five years:

Provided also that a person who was a member of the first Legislative Council and whose term was terminated by lots drawn before he could serve the full term of six years, shall be deemed, irrespective of the period for which he held office, to have served as member for five years:

Provided also that where a person is declared as elected by a court in an election petition and was not able to serve as a member during the pendency of the election petition, shall be deemed, irrespective of the period of actual service, to have served as a member for five years:

Provided also that where a person is declared as elected in a bye-election or is nominated as a member in the middle of a term and was not able to serve the full term, he shall be deemed, irrespective of the period of actual service, to have served as a member for five years:

Provided also that where a member resigns, he shall be deemed to have served as member for five years.

**Explanation.-** For the purpose of this sub-section, a member of the Legislative Assembly or the Legislative Council includes a person who prior to the 1st day of November 1956 represented any of the areas which with effect on and from the said date have become part of the new State of Karnataka, as a member of the Legislative Assembly or the Legislative Council of the State of which the said areas were part:

Provided that in the case of a nominated member of the Legislative Assembly or the Legislative Council he shall be eligible for the pension if during his membership of the Legislative Assembly or the Legislative Council, he permanently resided in any area which forms part of the State of Karnataka.

xx xx xx

(5) Every member entitled to pension under sub-section (1),-

(i) shall be provided with one 1[non transferable pass for him and his companion which shall entitle them]1 at any time to travel by road transport services of the Karnataka State Road Transport Corporation from the ordinary place of residence of such member]1 in Karnataka to any place in the State of Karnataka or outside the State and back in such class of accommodation therein as may be prescribed;

(ii) Shall be entitled to reimbursement of actual travel expenses for self along with his one companion in first class / second class A/C for journeys by train in India to a maximum of 35000 k.m. per annum subject to such rules as may be prescribed.

**11B. Family Pension.-** (1) Where a member dies before the expiry of his term or where a person eligible for pension under section 11-A dies, there shall be paid to his family, a family pension at the rate of fifty percent of pension admissible under section 11A per mensem.

xx xx xx

**12. Travelling and daily allowances of, and medical 1[and other]1 facilities to, members of the Legislative Assembly and the Legislative Council.-**

xx xx xx

(c) [Every member or on ex-member]4 and the members of his family who are residing with and are dependent on him shall be entitled,—

(i) free of charge to such accommodation in hospitals and dispensaries maintained by the State Government 1[or in hospitals or dispensaries notified by the Karnataka Legislature and to such medical attendance and treatment as may be prescribed;

xx xx xx

**13. Minister, a Minister of State, Deputy Minister, Chairman, Deputy Chairman, Speaker, Deputy Speaker, the Leaders of the Opposition the Government Chief Whips and the Opposition Chief Whips not to draw salaries as members.-** (1) A Minister, a Minister of State, a Deputy Minister, 3[the Chairman, the Deputy Chairman, the Speaker or the Deputy Speaker]3, 4[or the Leaders of the Opposition ,the Government Chief Whips or the Opposition Chief Whips shall not, while he draws the salary and allowance for his office, be entitled to any salary or allowance as a member of the Legislative Assembly or of the Legislative Council, as the case may be.

Provided that the Deputy Chairman or the Deputy Speaker who does not avail the facility provided under section 10B shall be entitled to the allowances specified in clauses (a) and (b) of section 12 as a member of the Legislative Assembly or the Legislative Council, as the case may be:

Provided further that he shall also be entitled to the allowances admissible under section 8 or under clause (f) of section 12, as the case may be;

(1A) Notwithstanding anything in sub-section (1), the Leader of the Opposition , the Government Chief Whips or the Opposition Chief Whips who does not avail the facility provided in section 10F or section 10K, as the case may be, shall be entitled to the allowances specified in clauses (a), (b), (e), (f) of section 12 as a member of the Legislative Assembly or the Legislative Council or as a Chairman of any committee of the Legislative Assembly or the Legislative Council or of both.

(2) The Chairman, the Deputy Chairman, the 2[Speaker, the Deputy Speaker, the Leaders of the Opposition ,the Government Chief Whips or the Opposition Chief Whips shall not during the tenure of his office practise any profession or engage in any trade or undertake for remuneration, any employment other than his duties as Chairman, the Deputy Chairman, the 2[Speaker, the Deputy Speaker, the Leaders of the Opposition or the Government Chief Whips]2, as the case may be.

**13A. Grant of advances for the purchase of Motor Cars, Motor cycles.-** Subject to such conditions as may be prescribed, every member shall be entitled to the grant of an advance for the purchase of a motor car or a motor cycle.

**13B. Recovery of dues.-** Any amount due to the Government or the Legislature Secretariat from a person who is or was a member of the Legislature may, without prejudice to any other mode of collection be recovered,—

(a) from his salary payable under section 11;

(b) from his pension payable under section 11-A;

(c) as if it were an arrear of land Revenue."

Explanation.—For the purpose of this section, a member of the Legislature includes a Minister, Minister of State, Deputy Minister, Chairman, Speaker, Deputy Speaker, Leader of the Opposition ,the Government Chief Whips or the Opposition Chief Whips.

**13C. Establishment of Benevolent Fund.—**(1) There shall be constituted a fund called the Karnataka Legislators' Benevolent Fund (hereinafter referred to as the Fund).

(2) The Fund specified in sub-section (1) shall consist of,—

(a) such amount as may be contributed by any member or former member of the Karnataka Legislative Assembly or the Karnataka Legislative Council;

(b) such amount as may be contributed or gifted or donated to the Fund by the Government or any other persons;

(c) the interest earned on the amount in the said Fund.

(3) The Fund shall be operated or administered or maintained by an authority called the Karnataka Legislators' Benevolent Fund Authority in accordance with such rules as may be prescribed.

(4) The Karnataka Legislative Assembly Benevolent Fund Authority shall consist of,-

| | | |
|---|---|---|
| (a) | The Speaker, Karnataka Legislative Assembly | Chairman |
| (b) | The Minister in-charge of Parliamentary Affairs, Government of Karnataka | Member |
| (c) | Leader of opposition in the Legislative Assembly | Member |

(d) The Secretary, Karnataka Legislative Assembly shall be the Secretary of the Authority.

(4A) The Karnataka Legislative Council Benevolent Fund Authority shall consist of,—

| | | |
|---|---|---|
| (a) | The Chairman, Karnataka Legislative Council | Chairman |
| (b) | The Minister in-charge of Parliamentary Affairs, Government of Karnataka. | Member |
| (c) | Leader of opposition in the Legislative Council | Member |

(d) The Secretary, Karnataka Legislative Council Shall be the Secretary of the Authority.

(5) The amount at credit in the said Fund shall subject to such rules as may be prescribed, be applied or invested or expended for the benefit or for the welfare of,—

(i) persons who are entitled to pension under section 11A;

(ii) the family of persons who die while serving as members of the Legislative Assembly or the Legislative Council;

(iii) the family of persons referred in clause (i) after their demise;

**Note.—**For the purpose of this section, family shall have the same meaning assigned to it in the explanation to sub-section (1) of section 11B.

xx xx xx

**P. OMPRAKASHA**
Secretary
Karnataka Legislative Assembly



## ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಮಂಗಳವಾರ, ಮಾರ್ಚ್ ೨೭, ೨೦೧೨ (ಚೈತ್ರ ೭, ಶಕ ವರ್ಷ ೧೯೩೪) | ನಂ. ೨೧೭ |
|---|---|---|



## KARNATAKA LEGISLATIVE ASSEMBLY SECRETARIAT

### NOTIFICATION

**No. KLA/LGA/1/Bill/2012, Bangalore, Dated: 27.3.2012**

The following Bill was introduced in Legislative Assembly on 27.3.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿಮೂರನೇ ಅಧಿವೇಶನ**

## ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ವಿಧೇಯಕ, 2012

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 1)**

ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನುಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ನ್ನು (1962ರ ಕರ್ನಾಟಕ ಅಧಿನಿಯಮ 10) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ಮೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಭೂ ಸುಧಾರಣೆಗಳ (ತಿದ್ದುಪಡಿ) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ 10) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 2ನೇ ಪ್ರಕರಣದ (ಎ) ಉಪಪ್ರಕರಣದ (1)ನೇ ಖಂಡದ (ಎಫ್) ಉಪಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಜಿ) ಬೇಸಾಯ ಆಧಾರಿತ ಕೈಗಾರಿಕೆಗಳು;

(ಹೆಚ್) ಬೇಸಾಯ ಸಂಸ್ಕರಣಾ ಕೈಗಾರಿಕೆಗಳು;

(ಐ) ಸುಗ್ಗಿಯ ನಂತರದ ಕಾರ್ಯಾರಂಭ ಮತ್ತು ಬೇಸಾಯ ಮೂಲ ಸೌಕರ್ಯ."

**3. 107ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 107ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ (viii)ನೇ ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ix) ಈ ಮುಂದಿನ, ಎಂದರೆ:–

(1) ಹೂಡಿಕೆದಾರರಿಂದ ಇತರ ಉದ್ದೇಶಗಳಿಗಾಗಿ ಭೂಮಿಯನ್ನು ಪರಿವರ್ತಿಸತಕ್ಕದ್ದಲ್ಲ;

(2) ರೈತರು ಭೂಮಿಯ ಮಾಲೀಕರಾಗಿ ಮುಂದುವರೆಯತಕ್ಕದ್ದು;

(3) ಭೂಮಿಗೆ ಯಾವುದೇ ರೀತಿಯ ಹಾನಿಯನ್ನು ಉಂಟುಮಾಡತಕ್ಕದ್ದಲ್ಲ.

(4) ಬೇಸಾಯ, ಬೇಸಾಯಕ್ಕೆ ಸಂಬಂಧಿಸಿದ ಚಟುವಟಿಕೆಗಳು ಮತ್ತು ಬೇಸಾಯ ಉತ್ಪನ್ನ ಮಾರುಕಟ್ಟೆ / ರಫ್ತು ಹಾಗೂ ಮೌಲ್ಯವೃದ್ಧಿ ಚಟುವಟಿಕೆಗಳನ್ನು ಹೂಡಿಕೆದಾರರು ಕೈಗೊಳ್ಳತಕ್ಕದ್ದು;

(5) ಬೇಸಾಯ ವ್ಯಾಪಾರ ಚಟುವಟಿಕೆಗಳು ಕರ್ನಾಟಕ ಸರ್ಕಾರವು ರೂಪಿಸಿದ ಸಮಗ್ರ ಬೇಸಾಯ ವ್ಯಾಪಾರ ಅಭಿವೃದ್ಧಿ ಕಾರ್ಯನೀತಿ, 2011ಕ್ಕೆ ಅನುಸಾರವಾಗಿ ಇರತಕ್ಕದ್ದು,

– ಎಂಬ ಷರತ್ತುಗಳಿಗೆ ಒಳಪಟ್ಟು ವ್ಯವಸ್ಥಾಪನೆಗಾಗಿ ಹೂಡಿಕೆದಾರರಿಗೆ ರೈತರು ಬಾಡಿಗೆಗೆ ನೀಡಿರುವ,"

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ನ್ನು (1962ರ ಕರ್ನಾಟಕ ಅಧಿನಿಯಮ 10) ತಿದ್ದುಪಡಿ ಮಾಡುವ ಮೂಲಕ, ಸಮಗ್ರ ಬೇಸಾಯ ವ್ಯಾಪಾರ ಅಭಿವೃದ್ಧಿ ಕಾರ್ಯನೀತಿ, 2011ನ್ನು ಅನುಷ್ಠಾನಗೊಳಿಸುವುದಕ್ಕೆ ಈ ಮುಂದಿನವುಗಳಿಗಾಗಿ, ಎಂದರೆ:–

(1) 'ಬೇಸಾಯ' ಎಂಬ ಪರಿಭಾಷೆಯೊಳಗೆ ಬೇಸಾಯ ಆಧಾರಿತ ಕೈಗಾರಿಕೆಗಳು, ಬೇಸಾಯ ಸಂಸ್ಕರಣಾ ಕೈಗಾರಿಕೆಗಳು, ಸುಗ್ಗಿಯ ನಂತರ ಕಾರ್ಯಾರಂಭ ಮತ್ತು ಬೇಸಾಯ ಮೂಲ ಸೌಕರ್ಯ ಇವುಗಳನ್ನು ಸೇರಿಸಲು;

(2) ಕೆಲವು ಷರತ್ತುಗಳಿಗೆ ಒಳಪಟ್ಟು, ಬೇಸಾಯ ಆಧಾರಿತ ಕೈಗಾರಿಕೆಗಳು ಮತ್ತು ಬೇಸಾಯ–ಮೂಲ ಸೌಕರ್ಯಗಳ ಹಕ್ಕಿಗಾಗಿ ಖಾಸಗಿ ಬೇಸಾಯ ಭೂಮಿಯನ್ನು ದೀರ್ಘಾವಧಿ ಗೇಣಿ ಆಧಾರದ ಮೇಲೆ ಬೇಸಾಯ ವ್ಯಾಪಾರಿ ಚಟುವಟಿಕೆಗಳಿಗಾಗಿ ನೀಡುವುದಕ್ಕೆ ಸಾಧ್ಯವಾಗುವಂತೆ ಮಾಡಲು,

–ಉಪಬಂಧ ಕಲ್ಪಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಡಿ.ವಿ. ಸದಾನಂದ ಗೌಡ**
ಮುಖ್ಯಮಂತ್ರಿ

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಭೂ ಸುಧಾರಣೆಗಳ ಅಧಿನಿಯಮ, 1961ರ (1962ರ ಕರ್ನಾಟಕ ಅಧಿನಿಯಮ 10)**

**ಉದ್ಧೃತ ಭಾಗ**

xx xx xx

**2. ಪರಿಭಾಷೆಗಳು.**–(ಎ) ಈ ಅಧಿನಿಯಮದಲ್ಲಿ ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯವಿರದಿದ್ದರೆ,–

(1) 'ಬೇಸಾಯ'ವು,–

(ಎ) ಮೀನು ಸಾಕಣೆ;

(ಎಎ) ಉದ್ಯಾನ ಕೃಷಿ;

(ಬಿ) ಬೆಳೆ, ಹುಲ್ಲು ಅಥವಾ ತೋಟದ ಉತ್ಪನ್ನಗಳನ್ನು ಬೆಳೆಸುವುದು;

(ಸಿ) ಹೈನುಗಾರಿಕೆ;

(ಡಿ) ಕೋಳಿಸಾಕಣೆ;

(ಇ) ಪಶು ಸಂವರ್ಧನೆ;

(ಎಫ್) ಮೇಯಿಸುವುದು,

–ಇವುಗಳನ್ನು ಒಳಗೊಳ್ಳುತ್ತದೆ; ಆದರೆ ಮರ ಕಡಿಯುವುದನ್ನು ಮಾತ್ರ ಒಳಗೊಳ್ಳುವುದಿಲ್ಲ.

xx xx xx

**107. ಕೆಲವು ಭೂಮಿಗಳಿಗೆ ಈ ಅಧಿನಿಯಮವು ಅನ್ವಯಿಸತಕ್ಕದ್ದಲ್ಲ.**– (1) 110ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, 8ನೇ ಪ್ರಕರಣದ ಹೊರತಾಗಿ ಈ ಅಧಿನಿಯಮದಲ್ಲಿ ಇರುವುದಾವುದೂ,–

(i) ಸರ್ಕಾರಕ್ಕೆ ಸೇರಿದ;

(ii) xxx

(iii) ಒಬ್ಬ ಸ್ಥಳೀಯ ಪ್ರಾಧಿಕಾರಿ, ಕರ್ನಾಟಕ ಬೇಸಾಯ ಉತ್ಪನ್ನಗಳ ಮಾರಾಟ ವಿನಿಯಮನ ಅಧಿನಿಯಮ, 1966ರ (1966ರ ಕರ್ನಾಟಕ ಅಧಿನಿಯಮ 27) ಮೇರೆಗೆ ರಚಿತವಾದ ಬೇಸಾಯ ಉತ್ಪನ್ನ ಮಾರುಕಟ್ಟೆ ಸಮಿತಿ, ಭಾರತದಲ್ಲಿ ವಿಧಿಬದ್ಧವಾಗಿ ಸ್ಥಾಪಿತವಾದ ವಿಶ್ವವಿದ್ಯಾನಿಲಯ, ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ಅವೆರಡರ ಒಡೆತನ ಅಥವಾ ನಿಯಂತ್ರಣದಲ್ಲಿರುವ ಒಂದು ಸಂಶೋಧನಾ ಸಂಸ್ಥೆ, ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರವು ಮಾನ್ಯತೆಯನ್ನು ನೀಡಿದ ಒಂದು ಕೃಷಿ ಸಂಶೋಧನಾ ಸಂಸ್ಥೆ, ಕರ್ನಾಟಕ ಭೂದಾನ ಯಜ್ಞ ಅಧಿನಿಯಮ, 1963ರ (1963ರ ಕರ್ನಾಟಕ ಅಧಿನಿಯಮ 34) ಮೇರೆಗೆ ಸ್ಥಾಪಿತವಾದ ಕರ್ನಾಟಕ ಭೂದಾನ ಯಜ್ಞ ಮಂಡಲಿ – ಇವುಗಳಿಗೆ ಸೇರಿದ ಅಥವಾ ಇವುಗಳು ಗುತ್ತಿಗೆಯ ಮೇಲೆ ಪಡೆದ ಅಥವಾ ಇವುಗಳು ಗುತ್ತಿಗೆಗೆ ಕೊಟ್ಟ;

(iv) ಸಾಹಸಕ್ಕೆ ಬಹುಮಾನವಾಗಿ ಕೊಟ್ಟ;

(ivಎ) ಭಾರತದಲ್ಲಿ ಕಾನೂನಿನ ಮೂಲಕ ಸ್ಥಾಪಿಸಲಾದ ವಿಶ್ವವಿದ್ಯಾನಿಲಯಕ್ಕೆ ಸಂಯೋಜಿತವಾದ ಸಂಶೋಧನಾ ಸಂಸ್ಥೆಗೆ ರಾಜ್ಯ ಸರ್ಕಾರವು ಮಂಜೂರು ಮಾಡಿದ;

(v) 1971ನೇ ಜನವರಿ 24ನೇ ದಿನಾಂಕದಂದು ಅಸ್ತಿತ್ವದಲ್ಲಿದ್ದ ಮತ್ತು ರಾಜ್ಯ ಸರ್ಕಾರದಿಂದ ಅನುಮೋದಿತವಾದ ಅಶ್ವಸಂವರ್ಧನ ಕ್ಷೇತ್ರಗಳಿಗಾಗಿ ನಿಯಮಿಸಬಹುದಾದ ಅಂಥ ನಿಯಮಗಳಿಗೆ ಒಳಪಟ್ಟು ಉಪಯೋಗಿಸುತ್ತಿರುವ;

(vi) ಲಿನೋಲಿಯಂ ಬೇಸಾಯಕ್ಕೆ ಉಪಯೋಗಿಸುತ್ತಿರುವ;

(vii) ಸಂಶೋಧನೆ, ಅಭಿವೃದ್ಧಿ ಅಥವಾ ಪ್ರಚಾರದ ಉದ್ದೇಶಗಳಿಗಾಗಿ ಕಾಫಿ ಮಂಡಲಿ ಅಧಿನಿಯಮ, 1942ರ (1942ರ ಕೇಂದ್ರ ಅಧಿನಿಯಮ 7) ಮೇರೆಗೆ ರಚಿತವಾದ ಕಾಫಿ ಮಂಡಲಿಯು ಹೊಂದಿರುವ;

(viii) ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಅಥವಾ ಅವೆರಡರ ಒಡೆತನದ ಅಥವಾ ನಿಯಂತ್ರಣದಲ್ಲಿರುವ ಯಾವುದೇ ನಿಗಮವು ಹೊಂದಿರುವ,

– ಭೂಮಿಗಳಿಗೆ ಅನ್ವಯಿಸತಕ್ಕದ್ದಲ್ಲ:

ಪರಂತು, ಕರ್ನಾಟಕ ಭೂದಾನ ಯಜ್ಞ ಮಂಡಲಿಗೆ ಸೇರಿದ ಅಥವಾ ಅದರಿಂದ ಗುತ್ತಿಗೆಗೆ ಪಡೆದ ಭೂಮಿಗಳ ಸಂದರ್ಭದಲ್ಲಿ ಅಂಥ ಭೂಮಿಗಳು ಸದರಿ ಮಂಡಲಿಗೆ ದಾನವಾದ ದಿನಾಂಕದಂದು ಗೇಣಿದಾರರ ಸ್ವಾಧೀನದಲ್ಲಿದ್ದರೆ ಈ ಪ್ರಕರಣದ ಮೇರೆಗಿನ ವಿನಾಯಿತಿಯು ಅನ್ವಯವಾಗತಕ್ಕದ್ದಲ್ಲ.

ಮತ್ತೂ ಪರಂತು, ಈ ಉಪಪ್ರಕರಣದಲ್ಲಿ ಏನೇ ಅಡಕವಾಗಿದ್ದರೂ (iii)ನೇ ಖಂಡದಲ್ಲಿ ಉಲ್ಲೇಖಿತವಾದ ಸ್ಥಳೀಯ ಪ್ರಾಧಿಕಾರಕ್ಕೆ, ಸಮಿತಿಗೆ, ವಿಶ್ವವಿದ್ಯಾನಿಲಯಕ್ಕೆ, ಸಂಸ್ಥೆಗೆ ಅಥವಾ ಮಂಡಳಿಗೆ ಗೇಣಿಗೆ ಕೊಟ್ಟ ಜಮೀನಿನ ವಿಸ್ತೀರ್ಣವನ್ನು ಅದರ ಒಡೆಯನು ತಾನು ಬಿಟ್ಟುಕೊಡಬೇಕಾದ ಹೆಚ್ಚುವರಿ ಜಮೀನನ್ನು ನಿರ್ಧರಿಸುವ ಉದ್ದೇಶಕ್ಕಾಗಿ ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದು.

**xx** **xx** **xx**

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY

### THIRTEENTH SESSION

## THE KARNATAKA LAND REFORMS (AMENDMENT) BILL, 2012
## (L.A. Bill No. 1 of 2012)

A Bill further to amend the Karnataka Land Reforms Act, 1961.

Whereas it is expedient further to amend the Karnataka Land Reforms Act, 1961 (Karnataka Act 10 of 1962) for the purposes hereinafter appearing;

Be it enacted by the Karnataka State Legislature in the sixty third year of Republic of India, as follows:-

**1. Short title and Commencement.-** (1) This Act may be called the Karnataka Land Reforms (Amendment) Act, 2012.

(2) It shall come into force at once.

**2. Amendment of section 2.-** In the Karnataka Land Reforms Act, 1961 (hereinafter referred to as the principal Act) in section 2, in sub-section(A), in clause (1), after sub-clause (f), the following shall be inserted, namely:-

" (g) Agro based Industries;

(h) Agro Processing Industries;

(i) post harvest operations and agri-infrastructure."

**3. Amendment of section 107.-** In section 107 of the Principal Act, in sub-section (1), after clause (viii), the following shall be inserted namely:-

"(ix) leased by farmers to investors for management subject to the following conditions, namely:-

(1) Land shall not be converted by the investor for other purposes;

(2) Farmer shall continue to be the owner of the land;

(3) No damage shall be caused to the land;

(4) Investor should take up agriculture, agriculture connected activities and agriculture produce marketing/export and value addition activities;

(5) Agri business activities shall be as per the Integrated Agri-business Development Policy, 2011 formulated by the Government of Karnataka."

## STATEMENT OF OBJECTS AND REASONS

It is considered necessary to implement Integrated Agri – Business Development Policy 2011 by amending the Karnataka Land Reforms Act, 1961 (Karnataka Act 10 of 1962), for the following, namely:-

(1) to include Agro based industries, Agro processing industries, post harvest operations and agri – infrastructure within the definition of Agriculture.

(2) to enable Agro based Industries and agri – infrastructure entities to hold private agricultural land on long term lease bases for agri business activities subject to certain conditions.

Hence the Bill.

## FINANCIAL MEMORANDUM

There is no extra expenditure involved in the proposed Legislative measure.

**D.V. SADANANDA GOWDA**
Chief Minister

**P. OMPRAKASHA**
Secretary
Karnataka Legislative Assembly

## ANNEXURE

### Extract from the Karnataka Land Reforms Act, 1961

### (Karnataka Act 10 of 1962).

**X X** **XX** **XX**

**2. Definitions.**—(A) In this Act, unless the context otherwise requires,—

(1) "agriculture" includes,—

(a) acquaculture;

(aa) horticulture;

(b) the raising of crops, grass or garden produce;

(c) dairy farming;

(d) poultry farming;

(e) breeding of livestock;

(f) grazing;

but does not include the cutting of wood only;

**X X** **XX** **XX**

**107. Act not to apply to certain lands.**— (1) Subject to the provisions of section 110, nothing in this Act, except section 8, shall apply to lands,—

(i) belonging to Government;

(ii) x x x

(iii) belonging to or held on lease or from a local authority, an Agricultural Produce Marketing Committee constituted under the Karnataka Agricultural Produce Marketing Regulation Act, 1966 (Karnataka Act 27 of 1966), a University established by law in India, a research institution owned or controlled by the State Government or the Central Government or bothan Agricultural Research Institution recognised by the State Government or the Central Government the Karnataka Bhoodhan Yagna Board established under the Karnataka Bhoodhan Yagna Act, 1963 (Karnataka Act 34 of 1963);

(iv) given as a gallantry award;

(iva) granted by the State Government to a Research Institution affiliated to a university established by law in India.

(v) used for such stud farms as are in existence on the 24th day of January 1971 and approved by the State Government ,subject to such rules as may be prescribed;

(vi) used for the cultivation of linaloe;

(vii) held by the Coffee Board constituted under the Coffee Act, 1942 (Central Act 7 of 1942) for purposes of research, development or propoganda:

(viii) held by any corporation owned or controlled by the State Government or the Central Government or both; Land Reforms 1962: KAR. ACT 10 110

Provided that in the case of lands belonging to or held on lease from the Karnataka Bhoodhan Yagna Board, the exemption under this section shall not be applicable if such lands were in the possession of tenants on the date of donation to the said Board.

Provided further that, notwithstanding anything contained in this sub-section, the extent of land leased to a local authority, a committee, a University, an institution, or a Board, referred to in clause (iii) shall count for the purpose of determining the surplus land to be surrendered by the owner thereof.

**X X** **XX** **XX**

**P. OMPRAKASHA**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – V | ಬೆಂಗಳೂರು, ಬುಧವಾರ, ಮಾರ್ಚ್ ೨೮, ೨೦೧೨ (ಚೈತ್ರ ೮, ಶಕ ವರ್ಷ ೧೯೩೪) | ನಂ. ೨೧೯ |
|---|---|---|

## ಕರ್ನಾಟಕ ಲೋಕ ಸೇವಾ ಆಯೋಗ

ಕರ್ನಾಟಕ ಲೋಕ ಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ " ಬೆಂಗಳೂರು–560001

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಆರ್(1)5824/2011–12/ಪಿಎಸ್‌ಸಿ, ಬೆಂಗಳೂರು, ದಿನಾಂಕ: 27–03–2012**

ಕರ್ನಾಟಕ ಲೋಕ ಸೇವಾ ಆಯೋಗದ ಅಧಿಸೂಚನೆ ಸಂಖ್ಯೆ ಆರ್(2)907/2011–12/ಪಿಎಸ್‌ಸಿ, ದಿನಾಂಕ : 18.01.2012 ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿನ ಗ್ರೂಪ್–ಎ ಕಿರಿಯ ಶ್ರೇಣಿಯ ಜಿಲ್ಲಾ ಶಿಕ್ಷಣಾಧಿಕಾರಿಗಳು 20 ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಆನ್–ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿದ್ದು, ಸದರಿ ಹುದ್ದೆಯ ಹೆಸರನ್ನು "ಜಿಲ್ಲಾ ಶಿಕ್ಷಣಾಧಿಕಾರಿಗಳು" ಎಂಬುದರ ಬದಲಿಗೆ "ಕ್ಷೇತ್ರ ಶಿಕ್ಷಣಾಧಿಕಾರಿಗಳು" ಎಂದು ಓದಿಕೊಳ್ಳತಕ್ಕದ್ದು.

**ವಿ.ಬಿ.ಪಾಟೀಲ್**
ಕಾರ್ಯದರ್ಶಿ,
ಕರ್ನಾಟಕ ಲೋಕ ಸೇವಾ ಆಯೋಗ

## KARNATAKA PUBLIC SERVICE COMMISSION

OFFICE OF THE KARNATAKA PUBLIC SERVICE COMMISSION " UDYOGA SOUDHA, BANGALORE-560001

**CORRIGENDUM NOTIFICATION**

**No. R(1)5824/2011-12/PSC, Bangalore, Dated: 27-03-2012**

Karnataka Public Service Commission issued a Notification vide No.R(2)907/2011-12/PSC dated 18-01-2012 inviting applications through ONLINE for the recruitment to 20 posts of District Educational officer in the Department of Public Instruction. The name of the post mentioned as "District Educational Officer ", in the above Notification shall be read as " Block Education Officer ".

**V.B.PATIL**
Secretary,
KARNATAKA PUBLIC SERVICE COMMISSION

# ವಿಶೇಷ ಪತ್ರಿಕೆ

| ಭಾಗ – V | ಬೆಂಗಳೂರು, ಬುಧವಾರ, ಮಾರ್ಚ್ ೨೮, ೨೦೧೨ (ಚೈತ್ರ ೮, ಶಕ ವರ್ಷ ೧೯೩೪) | ನಂ. ೨೨೦ |
|---|---|---|

## ಕರ್ನಾಟಕ ವಿಧಾನ ಸಭೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆಃ ಕವಿಸಸ/ಆ–1/57/ಕಿ.ಸ.ನೇ.ನೇ./2012, ಬೆಂಗಳೂರು, ದಿನಾಂಕಃ 28.03.2012**

**ವಿಷಯಃ** ಕರ್ನಾಟಕ ವಿಧಾನ ಸಭೆ ಸಚಿವಾಲಯದಲ್ಲಿ ಕಿರಿಯ ಸಹಾಯಕರ ಹುದ್ದೆಗಳನ್ನು ನೇರ ನೇಮಕಾತಿಯ ಮೂಲಕ ಭರ್ತಿ ಮಾಡುವ ಬಗ್ಗೆ.

ಕರ್ನಾಟಕ ವಿಧಾನ ಸಭೆ ಸಚಿವಾಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 2003 ಹಾಗೂ ತಿದ್ದುಪಡಿ ನಿಯಮಾವಳಿ 2009ರಡಿಯಲ್ಲಿ ಕರ್ನಾಟಕ ವಿಧಾನಸಭೆ ಸಚಿವಾಲಯದ ಕಿರಿಯ ಸಹಾಯಕರ ಹುದ್ದೆಗಳಿಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಹುದ್ದೆಗಳ ವಿವರಗಳು ಈ ಕೆಳಕಂಡಂತಿರುತ್ತವೆ.

**ಹುದ್ದೆಯ ಹೆಸರು :** **ಕಿರಿಯ ಸಹಾಯಕರು**

**ಹುದ್ದೆಗಳ ಸಂಖ್ಯೆ :** **10 ಹುದ್ದೆಗಳು**

**ವೇತನ ಶ್ರೇಣಿ :** **ರೂ. 5800–100–6000–125–6500–150–7100–175–7800–200–8600–225–9500–250–10500**

| | ಮೀಸಲಾತಿ ವರ್ಗೀಕರಣ | ಸಮತಳ ಮೀಸಲಾತಿ ವರ್ಗೀಕರಣ | | | | |
|---|---|---|---|---|---|---|
| ಕ್ರ. ಸಂ. | ಮೀಸಲಾತಿ | ಸಾಮಾನ್ಯ ಅರ್ಹತೆ | ಗ್ರಾಮೀಣ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತ ಅಭ್ಯರ್ಥಿ | ಖಾಲಿ ಇರುವ ಒಟ್ಟು ಹುದ್ದೆಗಳ ಸಂಖ್ಯೆ |
| 1. | ಪ.ಜಾ. | – | 01 | – | –– | 01 |
| 2. | ಸಾಮಾನ್ಯ | 01 | 01 | 02 | 01 | 05 |
| 3. | ಪ್ರವರ್ಗ – I | –– | –– | 01 | –– | 01 |
| 4. | II ಎ | –– | 01 | 01 | –– | 02 |
| 5. | II ಬಿ | –– | –– | 01 | –– | 01 |

1. **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 21.04.2012**

2. ಅರ್ಜಿ ಸಲ್ಲಿಸಬೇಕಾದ ವಿಳಾಸಃ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆಃ 5074, ಮೊದಲನೆ ಮಹಡಿ, ವಿಧಾನ ಸೌಧ, ಬೆಂಗಳೂರು–560 233.

3. ಕರ್ನಾಟಕ ವಿಧಾನ ಸಭೆ ಸಚಿವಾಲಯದ (ನೇಮಕಾತಿ ಹಾಗೂ ಸೇವಾ ಷರತ್ತುಗಳು) ನಿಯಮಾವಳಿಗಳನುಸಾರ ಮೇಲ್ಕಂಡ ಹುದ್ದೆಗಳ ಭರ್ತಿಗಾಗಿ ಅರ್ಹತೆಯುಳ್ಳ ಅಭ್ಯರ್ಥಿಗಳು ಅರ್ಜಿ ನಮೂನೆ–1ರ ದ್ವಿಪ್ರತಿಯಲ್ಲಿ ಅರ್ಜಿಗಳನ್ನು ಸರ್ಕಾರಿ ಪುಸ್ತಕ ಮಳಿಗೆಯಿಂದ ಪಡೆದು ವಿಧಾನಸಭೆ ಸಚಿವಾಲಯಕ್ಕೆ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಸಲ್ಲಿಸಬೇಕು. (ಅರ್ಜಿ ನಮೂನೆಯು ಸರ್ಕಾರಿ ಮುದ್ರಣಾಲಯದಲ್ಲಿ ದೊರೆಯುವುದು)

4. **ವಿದ್ಯಾರ್ಹತೆಃ** ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ಪ್ರಕಾರ ಅಭ್ಯರ್ಥಿಗಳು ನೇರ ನೇಮಕಾತಿಗೆ ಅರ್ಹತೆಯನ್ನು ಪಡೆದಿರಬೇಕು ಹಾಗೂ ಅವನು/ಅವಳು ಕೆಳಗೆ ತಿಳಿಸಿರುವ ವಿದ್ಯಾರ್ಹತೆಯನ್ನು ಹೊಂದಿರತಕ್ಕದ್ದು.

| ಕ್ರ. ಸಂ. | ಹುದ್ದೆಯ ಹೆಸರು | ವಿದ್ಯಾರ್ಹತೆ |
|---|---|---|
| 1 | **ಕಿರಿಯ ಸಹಾಯಕರು** | 1. ಮಾನ್ಯತೆ ಪಡೆದಿರುವ ವಿಶ್ವವಿದ್ಯಾಲಯದಿಂದ ಪದವಿ ಹೊಂದಿರಬೇಕು.<br>2. ಗಣಕ ಯಂತ್ರದ ಸಾಮಾನ್ಯ ಜ್ಞಾನವನ್ನು ಹೊಂದಿರಬೇಕು. |

5. **ವಯೋಮಿತಿಃ** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

**ಗರಿಷ್ಠ ವಯೋಮಿತಿಃ–**

ಸಾಮಾನ್ಯ ವರ್ಗ ಃ 35 ವರ್ಷ

ಪ್ರವರ್ಗ IIಎ, IIಬಿ, IIIಎ ಮತ್ತು IIIಬಿ ಃ 38 ವರ್ಷ

ಪ.ಜಾ/ಪ.ಪಂ/ಪ್ರವರ್ಗ–I ಃ 40 ವರ್ಷ

**6.** ಸರ್ಕಾರಿ ಇಲಾಖೆಗಳಲ್ಲಿ ಈಗಾಗಲೇ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಗಳನ್ನು ತಮ್ಮ ನೇಮಕಾತಿ ಪ್ರಾಧಿಕಾರದ ಮೂಲಕವೇ ನಿಗದಿತ ದಿನಾಂಕದೊಳಗೆ ಸಲ್ಲಿಸಬೇಕು.

**7.** ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ಪ್ರಕಾರ, ರಾಜ್ಯ ಸಿವಿಲ್ ಸೇವೆಗಳಲ್ಲಿ ಹುದ್ದೆಗಳಿಗೆ ನೇಮಕಾತಿ ಹೊಂದಲು ಅರ್ಹತೆ ಹೊಂದಿರುವ ಅಭ್ಯರ್ಥಿಗಳು ಮಾತ್ರ ನೇಮಕಾತಿಗೆ ಅರ್ಹರಾಗಿರುತ್ತಾರೆ.

**8.** (1) ಆಯ್ಕೆಯಾದ ಯಾವುದೇ ಅಭ್ಯರ್ಥಿಯು, ನೇಮಕಾತಿ ಪ್ರಾಧಿಕಾರಕ್ಕೆ ಅವನು/ಅವಳು ನೇಮಿಸಿರುವ ಕೆಲಸಕ್ಕೆ ದೈಹಿಕವಾಗಿ ಹಾಗೂ ಮಾನಸಿಕವಾಗಿ ಯೋಗ್ಯವೆನಿಸಿದ ಹೊರತು ಅವನನ್ನು/ಅವಳನ್ನು ಆ ಹುದ್ದೆಗೆ ನೇಮಿಸಲಾಗುವುದಿಲ್ಲ.

(2) ಸಕ್ಷಮ ನೇಮಕಾತಿ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ನೇಮಕಾತಿಗೆ ಅರ್ಹರಾಗಿರುವುದಿಲ್ಲ.

**9.** ಯಾವುದೇ ವ್ಯಕ್ತಿಯು ತನ್ನ ಉಮೇದುವಾರಿಕೆ ಬಗ್ಗೆ ಅಧಿಕಾರಿಗಳು ಮತ್ತು ಅಧಿಕಾರೇತರರುಗಳಿಂದ ಯಾವುದೇ ರೀತಿಯ ಒತ್ತಡ ತಂದಲ್ಲಿ ಸದರಿ ಹುದ್ದೆಯ ನೇಮಕಾತಿಗೆ ಅರ್ಹನಾಗುವುದಿಲ್ಲ.

**10.** **ಶುಲ್ಕ:** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಪ್ರವರ್ಗ–I ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ಇರುವುದಿಲ್ಲ. ಉಳಿದ, ಸಾಮಾನ್ಯ ವರ್ಗದ ಮತ್ತು ಇತರೆ ಹಿಂದುಳಿದ ವರ್ಗದ ಅಭ್ಯರ್ಥಿಗಳು ಕ್ರಾಸ್ ಮಾಡಿದ ರೂ.25.00ರ ಇಂಡಿಯನ್ ಪೋಸ್ಟಲ್ ಆರ್ಡರ್‌ನ್ನು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ 15 ದಿನಗಳೊಳಗಿರುವಂತೆ ಖರೀದಿಸಿ, ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ, ಮೊದಲನೆ ಮಹಡಿ, ವಿಧಾನಸೌಧ, ಬೆಂಗಳೂರು–560 233 ಈ ವಿಳಾಸಕ್ಕೆ ಪಾವತಿ ಮಾಡಬೇಕು. ಅರ್ಜಿ ಶುಲ್ಕವನ್ನು ಒಮ್ಮೆ ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ.

**11.** ಅಭ್ಯರ್ಥಿಗಳು ಅರ್ಜಿಯೊಂದಿಗೆ ಈ ಕೆಳಗೆ ತಿಳಿಸಲಾಗಿರುವ ದಾಖಲೆಗಳ ಜೆರಾಕ್ಸ್ ಪ್ರತಿಗಳನ್ನು ದ್ವಿಪ್ರತಿಗಳಲ್ಲಿ ತಪ್ಪದೇ ಲಗತ್ತಿಸಬೇಕು.

(ಅ) ಹುಟ್ಟಿದ ತಾರೀಖಿಗೆ ಆಧಾರದ ದಾಖಲೆ ಪ್ರತಿ.

(ಆ) ಪದವಿ ವಿದ್ಯಾರ್ಹತೆಗೆ ಸಂಬಂಧಿಸಿದಂತೆ ಮಾನ್ಯತೆ ಹೊಂದಿದ ವಿಶ್ವವಿದ್ಯಾನಿಲಯದಿಂದ ಪಡೆದ ಪದವಿ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ನಕಲು ಪ್ರತಿಗಳೊಂದಿಗೆ.

(ಇ) ಮಾನ್ಯತೆ ಪಡೆದ ಸಂಸ್ಥೆಯಿಂದ ಗಣಕಯಂತ್ರದ ಸಾಮಾನ್ಯ ಜ್ಞಾನದ ಪ್ರಮಾಣ ಪತ್ರದ ನಕಲು ಪ್ರತಿ.

(ಈ) ಅರ್ಜಿ ನಮೂನೆಯಲ್ಲಿ ನಿಗದಿಪಡಿಸಿರುವಂತೆ ನಡತೆಯ (Conduct) ಬಗ್ಗೆ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಇತ್ತೀಚಿನ ಪ್ರಮಾಣ ಪತ್ರಗಳು.

(ಉ) ಜಾತಿ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಸರ್ಕಾರದಿಂದ ನಿಗದಿಪಡಿಸಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

(ಊ) 1 ರಿಂದ 10ನೇ ತರಗತಿಯವರೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿದ್ದಕ್ಕಾಗಿ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ.

(ಋ) ಯೋಜನೆಗಳಿಂದ ನಿರಾಶ್ರಿತಗೊಂಡಿದ್ದಕ್ಕೆ ಸಂಬಂಧಪಟ್ಟ ಜಿಲ್ಲಾಧಿಕಾರಿ/ತಹಸೀಲ್ದಾರರಿಂದ ಪಡೆದ ದೃಢೀಕರಣ ಪತ್ರ.

**ಸೂಚನೆ:– ಅಭ್ಯರ್ಥಿಗಳು ಮೂಲ ಪ್ರಮಾಣ ಪತ್ರಗಳನ್ನು ಲಗತ್ತಿಸಬಾರದು.**

**12.** ಅರ್ಜಿಗಳನ್ನು ನಮೂನೆ 1 ರ ದ್ವಿಪ್ರತಿಯಲ್ಲಿ ಅಗತ್ಯವುಳ್ಳ ದಾಖಲೆಗಳನ್ನು ಲಗತ್ತಿಸಿ, ಕೊನೆಯ ದಿನಾಂಕ : 21.04.2012 ರಂದು ಸಂಜೆ 4–00 ಗಂಟೆಯ ಒಳಗಾಗಿ ಖುದ್ದಾಗಿ ಅಥವಾ ಅಂಚೆಯ ಮೂಲಕ ತಲುಪಿಸತಕ್ಕದ್ದು, ಸದರಿ ದಿನಾಂಕವು ಸಾರ್ವಜನಿಕ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನದಂದು ಅರ್ಜಿಯನ್ನು ಸಲ್ಲಿಸತಕ್ಕದ್ದು.

**13.** ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿ 2003ರ ರೀತ್ಯಾ ಹುದ್ದೆಗಳ ಆಯ್ಕೆ ಪ್ರಕ್ರಿಯೆಯ ಕಾರ್ಯ ವಿಧಾನವನ್ನು ನಿಗದಿಪಡಿಸುವ ಅಧಿಕಾರ ಮಾನ್ಯ ಸಭಾಧ್ಯಕ್ಷರವರಿಗೆ ಇರುತ್ತದೆ.

**ವಿಶೇಷ ಸೂಚನೆ :**

1. **ಅರ್ಜಿಗಳ ಮೇಲೆ ಹುದ್ದೆಯ ಹೆಸರನ್ನು ಹಾಗೂ ಅರ್ಜಿದಾರರ ಹೆಸರು, ತಂದೆಯ ಹೆಸರು ಮತ್ತು ಸರಿಯಾದ ವಿಳಾಸವನ್ನು ದಪ್ಪ ಅಕ್ಷರಗಳಲ್ಲಿ ನಮೂದಿಸತಕ್ಕದ್ದು.**
2. **ಅರ್ಜಿಯನ್ನು ಸಲ್ಲಿಸಲು ನೀಡಿರುವ ಕಾಲಾವಧಿಯು ಸರ್ಕಾರಿ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಸೇರಿದಂತೆ ಎಲ್ಲಾ ಅಭ್ಯರ್ಥಿಗಳಿಗೂ ಅನ್ವಯವಾಗುವುದು.**
3. **ಅಗತ್ಯ ಪ್ರಮಾಣ ಪತ್ರಗಳನ್ನು ಲಗತ್ತಿಸದೆ ಇರುವ, ಲೋಪ/ಅಪೂರ್ಣ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**
4. **ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಿದ ನಂತರ ಆ ಸಂಬಂಧ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.**

ಸಭಾಧ್ಯಕ್ಷರ ಆದೇಶಾನುಸಾರ,

**ಕೆ. ನೂರ್ ಮಹಮದ್**
ಉಪ ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆಯ ಸಚಿವಾಲಯ

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಮಾರ್ಚ್ ೨೮, ೨೦೧೨ (ಚೈತ್ರ ೮, ಶಕ ವರ್ಷ ೧೯೩೪) | ನಂ. ೨೨೩ |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 28 ಇಕಾಅ 2012, ಬೆಂಗಳೂರು, ದಿನಾಂಕ: 28ನೇ ಮಾರ್ಚ್ 2012**

ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011 (2012ರ ಕರ್ನಾಟಕ ಅಧಿನಿಯಮ ಸಂಖ್ಯೆ 01) ರ 1ನೇ ಪ್ರಕರಣ (2)ನೇ ಉಪ ಪ್ರಕರಣದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ **27ನೇ ಫೆಬ್ರವರಿ 2012ರಂದು** ಹೊರಡಿಸಿದ್ದ ಅಧಿಸೂಚನೆಯನ್ನು **ಮಾರ್ಪಡಿಸಿ** ಕರ್ನಾಟಕ ಸರ್ಕಾರವು **ದಿನಾಂಕ : 2ನೇ ಏಪ್ರಿಲ್ 2012ನ್ನು** ಕರ್ನಾಟಕ ನಾಗರಿಕರಿಗೆ ಸೇವೆಗಳ ಖಾತರಿ ಅಧಿನಿಯಮ, 2011 ಕರ್ನಾಟಕ ರಾಜ್ಯಾದ್ಯಂತ ಜಾರಿಗೆ ಬರುವ ದಿನಾಂಕವೆಂದು ಈ ಮೂಲಕ ತಿಳಿಯಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಪ್ರೇಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಆಸು–ನಾಗರಿಕ ಸೇವೆಗಳು)

## PERSONNEL AND ADMINISTRATIVE REFORMS SECRETARIAT

**NOTIFICATION**

**No. DPAR 28 EeKaAa 2012, Bangalore, Dated: 28th March 2012**

In exercise of the powers conferred under Section (1) of sub-section (2) of the Karnataka Guarantee of Services to the Citizens Act, 2011 (Karnataka Act No. 1 of 2012) and in modification of the Notification dated 27th February 2012, the State Government specify **2nd April 2012**, to be the date of effect of the provisions of the Karnataka Guarantee of Services to the Citizens Act 2011 throughout the State of Karnataka.

By Order and in the name of the Governor of Karnataka,

**M. S. Premachandra**
Under Secretary to Government
Department of Personnel & Administrative
Reforms (AR-Citizen Services)